

PRATHAM BOOKS
A Book in Every Child's Hand

# ದೊಡ್ಡ ದೊಡ್ಡ ಬೆಂಕಿಪೊಟ್ಟಣ

**Author:** Arvind Gupta
**Illustrator:** Meenal Singh
**Translator:** Kavitha Muchandi

Level 2



ಪ್ರೇಮ್ ಹತ್ತಿರದ ಸರಕಾರಿ
ಶಾಲೆಗೆ
ಹೋಗುತ್ತಿದ್ದ. ಅವನು
ಎರಡನೆಯ ತರಗತಿ
ವಿದ್ಯಾರ್ಥಿ.

ಅವನ ಮೇಡಂಗೆ ಸದಾ
ಹೊಸ ಹೊಸ ವಿಚಾರಗಳು
ಹೊಳೆಯುತ್ತಿದ್ದವು.



ಒಂದು ದಿನ ಅವರು ಎಲ್ಲಾ
ಮಕ್ಕಳಿಗೂ 'ಮಕ್ಕಳೇ ನಿಮಗೆ
ಒಂದು ವಾರ ಸಮಯ
ಕೊಡುತ್ತೇನೆ. ಒಂದು ಖಾಲಿ
ಬೆಂಕಿ ಪೊಟ್ಟಣ ದಲ್ಲಿ
ವಿಧವಿಧವಾದ ವಸ್ತುಗಳನ್ನು
ತುಂಬ ಬೇಕು. ಯಾರು
ಹೆಚ್ಚು ವಸ್ತು ಗಳನ್ನು
ತುಂಬುವರೋ ಅವರಿಗೆ
ಬಹುಮಾನ ಸಿಗುವುದು'
ಎಂದು ಹೇಳಿದರು.



ಇದು ಪ್ರೇಮ್ ಗೆ ತುಂಬ
ಹಿಡಿಸಿತು.

ಅವನು ಅವನ ಪೆನ್ಸಿಲ್
ಮತ್ತು ರಬ್ಬರ್ ಅನ್ನು ಖಾಲಿ
ಬೆಂಕಿ ಪೊಟ್ಟಣದಲ್ಲಿ ಹಾಕಲು
ಪ್ರಯತ್ನಿಸಿದ. ಆದರೆ
ಅದರೊಳಗೆ ಒಂದು ಮಾತ್ರ
ಹಿಡಿಸಿತು.
ಆಗ ಪ್ರೇಮ್
ಯೋಚಿಸತೊಡಗಿದ.

'ನಾನು ಇದರಲ್ಲಿ
ಏನೇನು ಹಾಕಬಲ್ಲೆ?'

ಸಂಜೆ ಮನೆಪಾಠ ಬರೆಯಲು ಕುಳಿತಾಗ ಪೆನ್ಸಿಲ್ ಕೆಳಗೆ ಬಿದ್ದು ಅದರ ಸೀಸ ಮುರಿಯಿತು. ಆ ಮುರಿದ ಸೀಸದ ತುಂಡನ್ನು ಬೆಂಕಿ ಪಟ್ಟಣದೊಳಗೆ ಹಾಕಿದ.

ಪೆನ್ಸಿಲ್ ಚೂಪು ಮಾಡುತ್ತಿದ್ದಾಗ ಬೀಳುತ್ತಿದ್ದ ಹೆಕ್ಕೆಗಳು ಸಹ ಬೆಂಕಿ ಪೊಟ್ಟಣ ಸೇರಿದವು.

ಈಗ ಪ್ರೇಮ್ ಚಿಕ್ಕ ಚಿಕ್ಕ ವಸ್ತುಗಳನ್ನು ಹುಡುಕಲು ಶುರು ಮಾಡಿದ.





ಹೀಗೆ ಹುಡುಕುತ್ತಿದ್ದಾಗ ಅಡುಗೆ ಮನೆಯಿಂದ ವಾಸನೆ ಬರತೊಡಗಿತು. ಆಗ ಅಡಿಗೆ ಮನೆಗೆ ಹೋದ.
ಅಮ್ಮ ಅವಲಕ್ಕಿ  ಮಾಡುತ್ತಿದ್ದರು.

ಪ್ರೇಮ್ ಜೀರಿಗೆಕಾಳು, ಒಣಮೆಣಸಿನಕಾಯಿಯ ಒಂದು ಬೀಜ, ಒಂದೊಂದು ಅಗಳು ಅಕ್ಕಿ, ಗೋಧಿ, ಜೋಳ, ನವಣೆ, ಹೆಸರಕಾಳು..

ಹೀಗೆ ಎಲ್ಲವೂ ಬೆಂಕಿ ಪೊಟ್ಟಣದಲ್ಲಿ ಹಾಕಿದ.



ಮಾರನೆಯ ದಿನ ಒಂದು ಚಿಕ್ಕ ರಬ್ಬರ್ ಬ್ಯಾಂಡ್, ಒಂದು ಚಿಕ್ಕ ಉಣ್ಣೆಯ ತುಂಡು, ಒಂದು ಎಳೆ ಕೂದಲು ಮತ್ತು ಒಂದು ತುಂಡು ದಾರ...

ಹೀಗೆ ಹುಡುಕಿ ಹುಡುಕಿ ಎಲ್ಲವನ್ನು ಬೆಂಕಿ ಪೊಟ್ಟಣದಲ್ಲಿ ತುಂಬಿಸುತ್ತಾ ಹೋದ.

ಮತ್ತೆ ಮರು ದಿನ, ಗುಲಾಬಿ ಗಿಡದ ಮುಳ್ಳು, ಸೂರ್ಯಕಾಂತಿ ಹೂವಿನ ದಳ, ಒಂದು ಚಹಾ ಗಿಡದ ಎಲೆ,
ಹುಣಸೆ ಗಿಡದ ಎಲೆ ಹಾಗೂಒಂದು ಚಿಕ್ಕ ಕಲ್ಲು..

ಹೀಗೆ ಎಲ್ಲವನ್ನು ಪೊಟ್ಟಣದೊಳಗೆ ಹಾಕತೊಡಗಿದ.



ಬೆಂಕಿಪೊಟ್ಟಣದ ಒಳಗೆ ಇನ್ನೂ ಜಾಗ ಉಳಿದಿತ್ತು.

ಆಗ ಪ್ರೇಮ್, ಒಂದು ಚಿಕ್ಕ ಕಾಗದದ ತುಂಡು, ಒಂದು ಪಿನ್, ಒಂದು ಸೂಜಿ, ಒಂದು ಚಿಕ್ಕ ಮೊಳೆ, ಮತ್ತು ಒಂದು ಚಿಕ್ಕ ಗುಂಡಿ ಹಾಕಿದರೂ ಸಹ ಬೆಂಕಿ ಪೊಟ್ಟಣ ತುಂಬಲಿಲ್ಲ.

ವಾರದ ಕಡೆಯ ದಿನ ಪ್ರೇಮ್ ಒಂದು ನಿಂಬೆ ಹಣ್ಣಿನ ಬೀಜ, ಒಂದು ಕಿತ್ತಳೆ ಹಣ್ಣಿನ ಬೀಜ, ಮತ್ತು ಒಂದು ಕುಂಬಳಕಾಯಿ ಬೀಜವನ್ನು ಸೇರಿಸಿದ.

ವಾ!ಕೊನೆಗೂ ಬೆಂಕಿ ಪೊಟ್ಟಣ ತುಂಬಿತು!

ಈಗ ಅದರಲ್ಲಿ ಇನ್ನೊಂದು ವಸ್ತುವಿಗೂ ಜಾಗವೇ ಇರಲಿಲ್ಲ.



ನಿಗದಿತ ದಿನ ಶಾಲೆಯಲ್ಲಿ ಎಲ್ಲಾ ಮಕ್ಕಳೂ ತಮ್ಮ ತಮ್ಮ ಬೆಂಕಿ ಪೊಟ್ಟಣಗಳಲ್ಲಿ ತುಂಬಿದ ವಸ್ತುಗಳನ್ನು ಎಣಿಸತೊಡಗಿದರು.

ಕೆಲವರು ಐವತ್ತು ವಸ್ತುಗಳನ್ನು, ಇನ್ನು ಕೆಲವರು ನೂರು ವಸ್ತುಗಳನ್ನು ಹಾಕಿದ್ದರು.



ಕೊನೆಗೆ ಪ್ರೇಮ್ ನ ಸರದಿ ಬಂತು, ಅವನು ತನ್ನ ಬೆಂಕಿ ಪೊಟ್ಟಣವನ್ನು ಹಿಡಿದು ಅಲುಗಾಡಿಸಿದ.

ಅದು ಯಾವುದೇ ಸದ್ದನ್ನು ಮಾಡಲಿಲ್ಲ!
ಏಕೆಂದರೆ ಅದು ಭರ್ತಿಯಾಗಿ ಹೋಗಿತ್ತು!



ಅದರಲ್ಲಿದ್ದ ಎಲ್ಲಾ
ವಸ್ತುಗಳನ್ನು
ಕೆಳಗೆ ಹಾಕಿ ಎಣಿಸಿದ.
ನೂರಾ ಐವತ್ತಕ್ಕೂ ಮೀರಿತ್ತು!
ಅಬ್ಬಾ! ಯಾರೂ ಅವನಷ್ಟು
ಸಂಗ್ರಹಿಸಿರಲಿಲ್ಲ.

ಪ್ರೇಮ್ ಸ್ಪರ್ಧೆಯಲ್ಲಿ ಗೆದ್ದ!
ಅವನಿಗೆ ಬಣ್ಣಗಳ ಒಂದು
ಕ್ರೆಯಾನ್ ಬಾಕ್ಸ್
ಬಹುಮಾನವಾಗಿ ದೊರಕಿತು.

PRATHAM BOOKS storyweaver



## Story Attribution:

This story: ದೊಡ್ಡ ದೊಡ್ಡ ಬೆಂಕಿಪೊಟ್ಟಣ is translated by Kavitha Muchandi . The © for this translation lies with Pratham Books, 2017. Some rights reserved. Released under CC BY 4.0 license. Based on Original story: 'The Big, Big Matchbox', by Arvind Gupta . © Pratham Books , 2017. Some rights reserved. Released under CC BY 4.0 license.

## Other Credits:

'Dodda Dodda Benkipottana' has been published on StoryWeaver by Pratham Books. The development of this book has been supported by Parag, an initiative of Tata Trusts. www.prathambooks.org

## Illustration Attributions:

Cover page: Schoolchildren with matchboxes, by Meenal Singh © Pratham Books, 2017. Some rights reserved. Released under CC BY 4.0 license. Page 2: Woman and children with matchbox, by Meenal Singh © Pratham Books, 2017. Some rights reserved. Released under CC BY 4.0 license. Page 3: Woman bends sideways, by Meenal Singh © Pratham Books, 2017. Some rights reserved. Released under CC BY 4.0 license. Page 4: Boy sits at table with cat, by Meenal Singh © Pratham Books, 2017. Some rights reserved. Released under CC BY 4.0 license. Page 5: Cat and pencil, by Meenal Singh © Pratham Books, 2017. Some rights reserved. Released under CC BY 4.0 license. Page 6: Boy smells food, by Meenal Singh © Pratham Books, 2017. Some rights reserved. Released under CC BY 4.0 license. Page 7: Houses, trees, roads, by Meenal Singh © Pratham Books, 2017. Some rights reserved. Released under CC BY 4.0 license. Page 8: Board pin, pair of hands, button, by Meenal Singh © Pratham Books, 2017. Some rights reserved. Released under CC BY 4.0 license. Page 9: Red and white matchbox, by Meenal Singh © Pratham Books, 2017. Some rights reserved. Released under CC BY 4.0 license. Page 10: Open matchbox filled with things by Meenal Singh © Pratham Books, 2017. Some rights reserved. Released under CC BY 4.0 license.






The development of this book has been supported by Parag, an initiative of Tata Trusts. www.prathambooks.org

# ದೊಡ್ಡ ದೊಡ್ಡ ಬೆಂಕಿಪೊಟ್ಟಣ

(Kannada)

ಪ್ರೇಮ್ ಹಾಗೂ ಅವನ ಗೆಳೆಯರಿಗೆ ಚಿಕ್ಕ ಬೆಂಕಿಪೊಟ್ಟಣದೊಂದಿಗೆ ಭಾರೀ ಕೆಲಸವಿತ್ತು. ನೀವೂ ಇದನ್ನು ಮನೆಯಲ್ಲಿ ಪ್ರಯತ್ನಿಸಿ ನೋಡಬಹುದು. ಗಂಟೆಗಟ್ಟಲೆ ಮೋಜು ನಿಮ್ಮದಾಗುವುದಂತೂ ಖಂಡಿತ!

ಇದು ಎರಡನೇ ಹಂತದ ಪುಸ್ತಕ. ಈಗಾಗಲೇ ತಿಳಿದಿರುವ ಪದಗಳನ್ನು ಗುರುತಿಸುವ ಮತ್ತು ಇತರರ ಸಹಾಯದೊಂದಿಗೆ ಹೊಸ ಪದಗಳನ್ನು ಓದುವ ಮಕ್ಕಳಿಗಾಗಿ.

